ಪಿ. ವಿ. ಕೃಷ್ಣಮೂರ್ತಿ

# ಬೆಂಗಳೂರು ಜಿಲ್ಲೆಯ ವಿಜಯನಗರ ಕಾಲದ ಆಡಳಿತ ವಿಭಾಗಗಳು

ದಕ್ಷಿಣಭಾರತದ ಇತಿಹಾಸದಲ್ಲಿ ವಿಜಯನಗರ ಅರಸರ ಆಳಿಕೆಯು ವಿಶಿಷ್ಟ ಸ್ಥಾನವನ್ನು ಪಡೆದಿದೆ. ದಕ್ಷಿಣದ ನಾಲ್ಕು ಭಾಷಾ ಪ್ರದೇಶಗಳ ಬಹುಭಾಗವನ್ನು ಒಳಗೊಂಡಿದ್ದ ಅವರ ಸಾಮ್ರಾಜ್ಯದಲ್ಲಿ ಆಡಳಿತದ ಅನುಕೂಲಕ್ಕಾಗಿ ಹಲವು ಹಂತಗಳ ಆಡಳಿತ ವಿಭಾಗಗಳನ್ನು ಅವರು ರೂಪಿಸಿಕೊಂಡಿದ್ದರು. ಕರ್ನಾಟಕ ಪ್ರದೇಶವನ್ನು ಆಳಿದ ಗಂಗ ಮತ್ತು ಚಾಲುಕ್ಯರಿಂದ ಪ್ರಾರಂಭಿಸಿ ಕಲ್ಯಾಣದ ಚಾಲುಕ್ಯರವರೆಗಿನ ಕಾಲಾವಧಿಯಲ್ಲಿ ಪ್ರಚಲಿತವಿದ್ದ ಬಹಳಷ್ಟು ಆಡಳಿತ ವಿಭಾಗಗಳು ಸಂಖ್ಯೆಗಳಿಂದ ಕೂಡಿದ್ದು, ಅದು ಕರ್ನಾಟಕ ಅರಸು ಮನೆತನಗಳ ವಿಶೇಷತೆಯೂ ಕೂಡ ಆಗಿದ್ದಿತೆಂಬ ಅಂಶ ಸರಿಯಷ್ಟೆ. ಆದರೆ ಈ ಅವಧಿಯಲ್ಲೇ ಆಳಿದ ಹೊಯ್ಸಳರು ಮಾತ್ರ ಈ ವಿಷಯದಲ್ಲಿ ತುಸು ಭಿನ್ನವಾಗಿರುವುದನ್ನು ನಾವು ಕಾಣಬಹುದು. ಇದಕ್ಕೆ ಮುಖ್ಯ ಕಾರಣ ಹೊಯ್ಸಳರ ಸಾಮ್ರಾಜ್ಯದ ವಿಸ್ತಾರ. ಕಾವೇರಿಯಿಂದ ದಕ್ಷಿಣಕ್ಕೆ, ಅಂದರೆ ತಮಿಳು ಪ್ರಾಂತದ ಅನೇಕ ಪ್ರದೇಶಗಳನ್ನು ಒಳಗೊಂಡಿದ್ದು, ಆಯಾ ಪ್ರದೇಶಗಳಲ್ಲಿ ಬಳಕೆಯಲ್ಲಿದ್ದ ಆಡಳಿತ ವಿಭಾಗ ಕ್ರಮವನ್ನೇ ಅವರು ಹೆಚ್ಚಿನ ಬದಲಾವಣೆಯಿಲ್ಲದೆ ಉಳಿಸಿಕೊಂಡಿದ್ದುದೇ ಆಗಿದೆ. ಅಂದರೆ ಹೊಯ್ಸಳರ ಇಡೀ ಸಾಮ್ರಾಜ್ಯದ ಆಡಳಿತ ವ್ಯವಸ್ಥೆಯಲ್ಲಿ ವಾಸ್ತವವಾಗಿ ಏಕರೂಪತೆಯಿರಲಿಲ್ಲವೆನ್ನಬಹುದು. ಹೊಯ್ಸಳರ ನಂತರ ವಿಜಯನಗರದ ಅರಸರು ಈ ಪ್ರದೇಶಗಳನ್ನು ಆಳತೊಡಗಿದಾಗ, ಆ ಹಿಂದೆ ಆಯಾ ಪ್ರದೇಶಗಳಲ್ಲಿ ಪ್ರಚಲಿತವಿದ್ದ ಬೇರೆ ಬೇರೆ ತೆರನಾದ ಆಡಳಿತ ವಿಭಾಗ ಕ್ರಮಗಳನ್ನು ಕ್ರೋಢೀಕರಿಸಿ ಒಂದು ಸಾಮಾನ್ಯೀಕರಣಗೊಂಡ ಇಡೀ ಸಾಮ್ರಾಜ್ಯಕ್ಕೆ ಸೂಕ್ತವೆನಿಸಬಹುದಾದ ಪದ್ಧತಿಯೊಂದನ್ನು ಜಾರಿಗೆ ತರಬೇಕಾದ ಅಗತ್ಯವಿದ್ದಿತು. ಈ ಹಿನ್ನೆಲೆಯಲ್ಲಿ ಮೂಡಿಬಂದ ಅವರ ಕಾಲದ ಆಡಳಿತ ವಿಭಾಗಗಳೇ ರಾಜ್ಯ ; ವೇಂಠೆ/ವಳಿತ/ಚಾವಡಿ ; ನಾಡು/ಸೀಮೆ ; ಸ್ಥಳ ಮತ್ತು ಗ್ರಾಮ ಎಂಬುವು.

ಆಡಳಿತ ವಿಭಾಗಗಳಿಗೆ ಸಂಬಂಧಿಸಿದಂತೆ ಶಾಸನೋಕ್ತವಾಗಿರುವ ಅಂಶಗಳ ಹಿನ್ನೆಲೆಯಲ್ಲಿ ವಿಜಯನಗರ ಕಾಲದ ಆಡಳಿತ ವಿಭಾಗಗಳ ಅನುಶ್ರೇಣಿಯನ್ನು ಗುರುತಿಸ ಹೊರಟರೆ ಅನೇಕ ತೊಡಕುಗಳು ಎದಿರಾಗುತ್ತವೆ. ಅನೇಕ ಶಾಸನಗಳಲ್ಲಿ 'ರಾಜ್ಯ'ದ ಬದಲು ಸೀಮೆ, ಸ್ಥಳ, ವಳಿತ ಮತ್ತು ವೇಂಠೆ ಎಂಬ ಪದಗಳನ್ನು ಉಪಯೋಗಿಸಲಾಗಿದೆ. ಹಲವು ಸ್ಥಳಗಳಲ್ಲಿ ಅವುಗಳನ್ನು ರಾಜ್ಯದೊಳಗಿನ ಸಣ್ಣ ವಿಭಾಗಗಳನ್ನು ಸೂಚಿಸಲು ಉಪಯೋಗಿಸಲಾಗಿದೆ–ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿರುತ್ತಾರೆ. ಆದರೆ, ಅದು ಮೈಸೂರು ರಾಜ್ಯದ, ಮೈಸೂರುಜಿಲ್ಲೆಯ, ಮೈಸೂರು ತಾಲೂಕಿನ, ಮೈಸೂರು ಸ್ಥಳದ ಎಂಬ ರೀತಿಯಲ್ಲಿ ಉಕ್ತವಾಗಿದ್ದಿರಬೇಕೆಂದು ತೋರುತ್ತದೆ. ಆದರೂ ಈ ದಿಸೆಯಲ್ಲಿ ತುಸುಮಟ್ಟಿನ ಗೊಂದಲವಿರುವುದು ನಿಜ. ಇಂತಹ ಗೊಂದಲ ಕೇವಲ ವಿಜಯನಗರ ಆಳಿಕೆಗೆ ಮಾತ್ರ ಅನ್ವಯವಾಗುವುದಿಲ್ಲ. ಭಾರತದ ಇತರ ಪ್ರದೇಶಗಳ, ರಾಜವಂಶಗಳ, ಬೇರೆ ಬೇರೆ ಕಾಲಗಳ ಈ ಆಡಳಿತ ವಿಭಾಗಗಳ ಅನುಶ್ರೇಣಿಯ ಕ್ರಮವು ಇಂತಹ ಗೊಂದಲಗಳಿಂದ ಕೂಡಿರುವುದನ್ನು

ಡಾ॥ ಡಿ. ಸಿ. ಸರ್ಕಾರ್‌ರವರು ಸಾಧಾರವಾಗಿ ಗುರುತಿಸಿರುತ್ತಾರೆ. ಅಷ್ಟೇ ಅಲ್ಲದೆ ಕೆಲವೊಂದು ಪ್ರದೇಶಗಳಿಗೇ ಸೀಮಿತವಾದ ಕೆಲವು ವಿಶಿಷ್ಟ ಆಡಳಿತ ವಿಭಾಗ ಸೂಚಿ ಪದಗಳು ಕೂಡ ಗಮನ ಸೆಳೆಯುತ್ತವೆ. ಉದಾಹರಣೆಗೆ ಕೋಲಾರ ಮತ್ತು ಬೆಂಗಳೂರು ಜಿಲ್ಲಾ ಪ್ರದೇಶಗಳಲ್ಲಿ ಕಂಡುಬರುವ 'ಪಟ್ಟಡಿ' ಎಂಬ ಆಡಳಿತ ವಿಭಾಗದ ಉಲ್ಲೇಖಗಳು.ಹಾಗೆಯೇ ಬೆಂಗಳೂರು ಜಿಲ್ಲಾ ಪ್ರದೇಶದ ವಿಜಯನಗರದ ಆಳಿಕೆಯ ಕಾಲದಲ್ಲಿ ಅಂದರೆ ಕ್ರಿ. ಶ. ೧೫೦೬ರಷ್ಟು ಹಿಂದೆ, ಅಷ್ಟು ಪ್ರಚಲಿತವಲ್ಲದ 'ಚಾವಡಿ' ಪ್ರಯೋಗವು ಶಾಸನವೊಂದರಲ್ಲಿ ಪ್ರದೇಶವಾಚಕವಾಗಿ ಪ್ರಯುಕ್ತವಾಗಿರುವುದು ಪರಿಶೀಲನಾರ್ಹ.

ಒಟ್ಟಾರೆ, ವಿಜಯನಗರ ಕಾಲದ ಆಡಳಿತ ವಿಭಾಗಗಳ ಹಂತಗಳನ್ನು ಸ್ಥೂಲವಾಗಿ,

೧. ದೇಶ/ರಾಜ್ಯ
೨. ಚಾವಡಿ/ಮಾಗಣೆ/ವಳಿತ/ವೇಂಠೆ
೩. ನಾಡು/ಸೀಮೆ
೪. ಸ್ಥಳ
೫. ಗ್ರಾಮ

ಎಂಬುದಾಗಿ ಗುರುತಿಸಬಹುದಾಗಿದೆ. ಇವಲ್ಲದೆ, ಪಟ್ಟಣ, ಅಗ್ರಹಾರ ಮತ್ತು ವೃತ್ತಿಯಾಗಿ ನೀಡಲಾಗಿದ್ದ ಸ್ಥಳಗಳು ಪ್ರತ್ಯೇಕ ಸ್ವಾಯತ್ತ ಆಡಳಿತ ಘಟಕಗಳಾಗಿದ್ದುವೆಂದು ತೋರುತ್ತದೆ.

ಬೆಂಗಳೂರು ಜಿಲ್ಲಾ ಪ್ರದೇಶದಲ್ಲಿ ದೊರೆತಿರುವ ವಿಜಯನಗರ ಕಾಲದ ಅಂದರೆ ಕ್ರಿ.ಶ. ಸು. ೧೩೪೦ ರಿಂದ ೧೬೪೦ರ ವರೆಗಿನ ಕಾಲಾವಧಿಯ ಶಾಸನಗಳಲ್ಲಿ ದಾಖಲಾಗಿರುವ ಆಡಳಿತ ವಿಭಾಗಗಳಿಗೆ ಸಂಬಂಧಿಸಿದ ಅಂಶಗಳನ್ನು ಅವಲೋಕಿಸಿದರೆ, ಹಲವಾರು ರಾಜ್ಯಗಳ ಚಾವಡಿ/ವಳಿತ/ಪಟ್ಟಡಿ/ವೇಂಠೆಗಳ, ನಾಡು/ಸೀಮೆಗಳ, ಸ್ಥಳ ಮತ್ತು ಗ್ರಾಮಗಳ ಉಲ್ಲೇಖಗಳಿದ್ದು ಗಮನ ಸೆಳೆಯುತ್ತವೆ.

ಇವುಗಳಲ್ಲಿ ಮೇಲಿನ ಸ್ತರದ ಆಡಳಿತ ವಿಭಾಗಗಳಾದ ರಾಜ್ಯ, ಚಾವಡಿ/ಮಾಗಣೆ/ವಳಿತ/ವೇಂಠೆಗಳೆಂಬುವು ಕಾಲಾಂತರದಲ್ಲಿ ತಮ್ಮ ಪ್ರಾಮುಖ್ಯತೆಯನ್ನು ಕಳೆದುಕೊಂಡು ಆ ಜಾಗಗಳಲ್ಲಿ ಹೊಸ ಆಡಳಿತ ವಿಭಾಗಗಳು ತಲೆಯೆತ್ತುತ್ತಿದ್ದುದು ಕೂಡ ಕಂಡುಬರುತ್ತದೆ. ಇದಕ್ಕೆ ಕಾರಣ ರಾಜವಂಶಕ್ಕೆ ಸೇರಿದ ವ್ಯಕ್ತಿಗಳನ್ನು ಇಂತಹ ರಾಜ್ಯಗಳ ಪ್ರಾಂತ್ಯಾಧಿಕಾರಿಗಳನ್ನಾಗಿ ನೇಮಿಸುತ್ತಿದ್ದುದೇ ಆಗಿದೆ. ವಿಜಯನಗರವನ್ನು ಆಳಿದ ಮೊದಲನೆಯ ವಂಶದ ರಾಜಕುಮಾರರು, ಈ ರೀತಿ ಪ್ರಾಂತ್ಯಾಧಿಕಾರಿಳಾಗಿ ನೇಮಿಸಲ್ಪಟ್ಟವರು, ಒಡೆಯ ಅಥವಾ ಒಡೆಯರ್ ಎಂಬ ಬಿರುದನ್ನು ಪಡೆದುಕೊಳ್ಳುತ್ತಿದ್ದರು. ಮೊದಲನೇ ಹರಿಹರನು ಸಾಮ್ರಾಟನಾಗಿದ್ದಾಗ, ಮಾರಪ್ಪ ಆರಗದ ಪ್ರಾಂತ್ಯಾಧಿಕಾರಿಯಾಗಿ ಚಂದ್ರಗುತ್ತಿಯನ್ನು ರಾಜಧಾನಿಯನ್ನಾಗಿ ಹೊಂದಿದ್ದನು. ಮೊದಲನೆಯ ಕಂಪಣನು ಉದಯಗಿರಿ ರಾಜ್ಯದಪ್ರಾಂತ್ಯಾಧಿಕಾರಿಯಾಗಿದ್ದನು. ಎರಡನೆಯ ಹರಿಹರನ ಮಗ ವಿರೂಪಾಕ್ಷನು ತುಂಡೀರ, ಚೋಳ ಮತ್ತು ಪಾಂಡ್ಯರಾಜ್ಯಗಳ ಅಧಿಕಾರವನ್ನು ಹೊಂದಿದ್ದು ಸಿಂಹಳವನ್ನು ಆಕ್ರಮಿಸಿಕೊಂಡನು. ಹೀಗೆ ಅನೇಕ ಉದಾಹರಣೆಗಳನ್ನು ನೀಡುತ್ತಾ ಹೋಗಬಹುದು.

ಈ ಹಿನ್ನೆಲೆಯಲ್ಲಿ, ಬೆಂಗಳೂರು ಜಿಲ್ಲೆಯ ಕನಕಪುರ ತಾಲೂಕಿನ ಪ್ರದೇಶದಲ್ಲಿ ಕ್ರಿ. ಶ. ೧೪೦೦ರ ಸುಮಾರಿನಲ್ಲಿ ಅಸ್ತಿತ್ವದಲ್ಲಿದ್ದ ಅರುಳಹಾಳ ರಾಜ್ಯ, ನಂತರದ ಕಾಲದಲ್ಲಿ ಪ್ರಸ್ತಾಪಿತವಾಗುವುದೇ ಇಲ್ಲ. ಮುಳಬಾಗಿಲು ರಾಜ್ಯ ಮತ್ತು ಹೊಯ್ಸಳ ರಾಜ್ಯಗಳು ವಿಜಯನಗರ ಸಾಮ್ರಾಜ್ಯದ ಪ್ರಾರಂಭ ಕಾಲದಿಂದ ತುಳುವ ವಂಶದ ಆಳಿಕೆಯ ಕಾಲದವರೆಗೂ ಹೆಚ್ಚು ಪ್ರಬಲ ಹಾಗೂ ಗಮನಾರ್ಹ ರಾಜ್ಯಗಳಾಗಿ ಈ ಪ್ರದೇಶದಲ್ಲಿನ ನಾಡು/ಸೀಮೆಗಳ ಮೇಲೆ ಅಧಿಕಾರವನ್ನು ಪಡೆದಿದ್ದವು. ಕ್ರಿ.ಶ. ೧೫೫೧ರ ಸುಮಾರಿನಲ್ಲಿ ಈ ಜಿಲ್ಲೆಯ ನೆಲಮಂಗಲ ತಾಲೂಕಿನ ಶಾಸನಗಳಲ್ಲಿ ಪೆನುಗೊಂಡೆ ರಾಜ್ಯದ ಪ್ರಸ್ತಾಪ ಕಂಡುಬರುತ್ತದೆ.

ಮುಳವಾಯಿ ಅಥವಾ ಮುಳುಬಾಗಿಲು ರಾಜ್ಯವು ಕೋಲಾರ ಜಿಲ್ಲೆಯ ಮುಳಬಾಗಿಲು, ಮಾಲೂರು, ಬೆಂಗಳೂರು ಜಿಲ್ಲೆಯ ಹೊಸಕೋಟೆ, ಬೆಂಗಳೂರು ದಕ್ಷಿಣ, ಆನೇಕಲ್ಲು ತಾಲೂಕುಗಳ ಪ್ರದೇಶಗಳ ಜೊತೆಗೆ ಇಂದಿನ ತಮಿಳುನಾಡಿನ ಧರ್ಮಪುರಿ ಜಿಲ್ಲೆಯ ಅನೇಕ ಭಾಗಗಳು ಈ ರಾಜ್ಯದಲ್ಲಿ ಅಂತರಗತವಾಗಿದ್ದವು. ಬೆಂಗಳೂರು ಜಿಲ್ಲಾ ಪ್ರದೇಶದ ಮಟ್ಟಿಗೆ ಮುಳವಾಯಿ

ರಾಜ್ಯದಲ್ಲಿ ಬೇಹೂರುನಾಡು ಮತ್ತು ತುರೈವಳಿನಾಡು ಗಳು ಸೇರಿದ್ದುವೆಂಬ ಅಂಶ ಶಾಸನಗಳಲ್ಲಿ ಉಕ್ತವಾಗಿದೆ. ಬೆಂಗಳೂರು ಜಿಲ್ಲೆಯ ಸಾರಕ್ಕಿ, ಬೇಹೂರು (ಬೇಗೂರು), ಹುಸುಕೂರು, ಬೇಲೂರು, ಬೆಟ್ಟದಹಳ್ಳಿ, ವೊಗಟ್ಟ(ವಾಗಟ) ಮುಂತಾದ ಗ್ರಾಮಗಳು ಶಾಸನೋಕ್ತ ವಾಗಿವೆ.

ಪೊಯಿಸಣನಾಡು ಅಥವಾ ಹೊಯಿಸಣ ನಾಡೆಂದು ಕರೆಯಲ್ಪಟ್ಟಿರುವ ಹೊಯ್ಸಳ ದೇಶದಲ್ಲಿ ಬೆಂಗಳೂರು ಜಿಲ್ಲೆಯ ಪಶ್ಚಿಮ ದಿಸೆಯ ಚನ್ನಪಟ್ಟಣ, ರಾಮನಗರ, ಮಾಗಡಿ ತಾಲೂಕಿನ ಭಾಗಗಳು ಸೇರಿದ್ದವು. ಚನ್ನಪಟ್ಟಣ ರಾಜ್ಯ ಹೊಯ್ಸಳ ದೇಶದ ಭಾಗವಾಗಿತ್ತು. ಒಟ್ಟಾರೆ, ವಿಜಯನಗರ ಕಾಲದ ಆಡಳಿತ ವಿಭಾಗಗಳಲ್ಲಿ ಹೊಯ್ಸಳ ರಾಜ್ಯವು ಬಹು ವಿಸ್ತಾರವಾಗಿದ್ದಿತು. ಅಂದರೆ ವಿಜಯನಗರದ ಸ್ಥಾಪನೆಗೆ ಮೊದಲು ಹೊಯ್ಸಳರ ಆಳ್ವಿಕೆಯಲ್ಲಿದ್ದ ಕರ್ನಾಟಕದ ಮತ್ತು ತಮಿಳುನಾಡಿನ ಹಲವು ಭಾಗಗಳು ಈ ದೇಶ/ರಾಜ್ಯದಲ್ಲಿ ಸಮಾವೇಶ ಗೊಂಡಿದ್ದವು.

ಇಂದಿನ ಬೆಂಗಳೂರು ಜಿಲ್ಲೆಯ ಕನಕಪುರ ತಾಲೂಕಿನ ಪ್ರದೇಶವು ಅರುಳಹಾಳ ರಾಜ್ಯದಲ್ಲಿ ಅಂತರಗತವಾಗಿದ್ದಿತು. ಈ ಭಾಗವನ್ನು ಕಾಚಣ ಒಡೆಯನೆಂಬುವನು ಆಳುತ್ತಿದ್ದ. ಅರುಳಹಾಳ ವೂರಗೌಡನ ಮಗ ಅಲ್ಲ ಗವುಡನು ಸಿಗಲನಾಡ ಪ್ರಭುವಾಗಿದ್ದನು. ಸಿಗಲ ನಾಡನ್ನು ಶೀಗಲನಾಡು, ಸಿಂಗಲನಾಡು ಎಂದೂ ಶಾಸನ ಗಳಲ್ಲಿ ಕರೆಯಲಾಗಿದೆ. ಕನಕಪುರ ತಾಲೂಕಿನ ಗ್ರಾಮ ಗಳಾದ ಮಾರೇನಹಳ್ಳಿ(ಎಡಮಾರನಹಳ್ಳಿ), ಅರುಳಹಾಳ, ಮಾರಸಮುದ್ರ ಮುಂತಾದವು ಈ ರಾಜ್ಯದ ಗ್ರಾಮ ಗಳೆಂದು ಶಾಸನೋಕ್ತವಾಗಿವೆ.

ಚನ್ನಪಟ್ಟಣ ರಾಜ್ಯದಲ್ಲಿ ಕಿಳಲೆನಾಡು ಮತ್ತು ಹೊಂಪುಳಿಗೆ ನಾಡುಗಳು ಅಂತರಗತವಾಗಿದ್ದವು. ಕೋಡಂಬಳ್ಳಿ, ನಿಟ್ಟೂರು, ಸರಗೂರು, ಹಲಸನಹಳ್ಳಿ, ಅಂಕನಹಳ್ಳಿ, ಯಲೆಯೂರು, ಕಟಗೆರೆ, ತಾರಾಂಕನ ಹಳ್ಳಿ, ಕೂಚಗೆರೆ, ಸಿಧಾಪುರ ಮುಂತಾದ ಊರುಗಳು ಈ ರಾಜ್ಯಕ್ಕೆ ಸೇರಿದ್ದವು.

ಪೆನುಗೊಂಡೆ ರಾಜ್ಯವನ್ನು ಉಲ್ಲೇಖಿಸುವ ಕ್ರಿ.ಶ. ೧೫೫೧ರ ಶಾಸನ ನೆಲಮಂಗಲ ತಾಲೂಕಿನ ಬೂದಿಹಾಳು ಗ್ರಾಮದಲ್ಲಿದ್ದು, ಮುರುಗುಳುನಾಡು ಮತ್ತು ಗೂಳೂರು ಸೀಮೆಗಳು ಈ ರಾಜ್ಯದ ಭಾಗಗಳೆಂದು ತಿಳಿದುಬರು ತ್ತದೆ. ಈ ರಾಜ್ಯವನ್ನು ವಿಜಯನಗರದ ಅರಸು ಇಮ್ಮಡಿ ದೇವರಾಯನು ತನ್ನ ಜ್ಯೇಷ್ಠ ಸೋದರನಿಗಾಗಿ ಸ್ಥಾಪಿಸಿದನೆಂಬ ಅಂಶ ಶ್ರೀಶೈಲಂ ತಾಮ್ರಶಾಸನದಲ್ಲಿ ಉಕ್ತವಾಗಿದೆಯೆಂದು ತಿಳಿದುಬರುತ್ತದೆ. ಇದೇ ನೆಲ ಮಂಗಲ ತಾಲೂಕಿನ ಬಿನ್ನಮಂಗಲ ಗ್ರಾಮದ ಶಾಸನ ದಲ್ಲೂ ಪೆನುಗೊಂಡೆ ರಾಜ್ಯದ ಪ್ರಸ್ತಾಪವಿದ್ದು, 'ಬಿಣ ಮಂಗಲ' ಗ್ರಾಮವು ಆ ರಾಜ್ಯದ ಗ್ರಾಮವೆಂದು ಗೊತ್ತಾಗುತ್ತದೆ. ಪೆನುಗೊಂಡೆ ರಾಜ್ಯದಲ್ಲಿ ತುಮಕೂರು ಜಿಲ್ಲೆಯ ತುಮಕೂರು, ಸಿರಾ ಮತ್ತು ಪಾವಗಡ ತಾಲೂಕುಗಳು, ಕೋಲಾರ ಜಿಲ್ಲೆಯ ಬಾಗೇಪಲ್ಲಿ ತಾಲೂಕು ಮತ್ತು ಆಂಧ್ರಪ್ರದೇಶದ ಪೆನುಗೊಂಡೆಯು ಸೇರಿದಂತೆ ಅನಂತಪುರ ಜಿಲ್ಲೆಯ ಭಾಗಗಳು ಅಂತರಗತ ವಾಗಿದ್ದವು. ತ್ಯಾಮಗೊಂಡ್ಲು, ಗಂಡನಹಳ್ಳಿ, ವಿಶ್ವ ನಾಥಪುರ, ಜಖನಹಳ್ಳಿ, ಹರಿವೇಸಂದ್ರ, ಕೋಡಿಹಳ್ಳಿ, ತಿಲ್ಲಗಟ್ಟ > ಶ್ರೀನಿವಾಸಪುರವೆಂಬ ನೃಸಿಂಹ್ಯಪುರ ಗ್ರಾಮ, ಬಿಲನಕೋಟೆ, ಹೊಸಹಳ್ಳಿ (ದೇವರ ಹೊಸಹಳ್ಳಿ) ಮುಂತಾದ ಬೆಂಗಳೂರು ಜಿಲ್ಲೆಯ ಗ್ರಾಮಗಳು ಈ ರಾಜ್ಯದಲ್ಲಿ ಅಂತರಗತವಾಗಿದ್ದವು.

ಬೆಂಗಳೂರು ಜಿಲ್ಲೆಯ ಹೊಸಕೋಟೆ ಮತ್ತು ನೆಲಮಂಗಲ ತಾಲೂಕಿನ ಕೆಲವು ಶಾಸನಗಳಲ್ಲಿ ರಾಜ್ಯದ ನಂತರ, ಆದರೆ ನಾಡಿನ ಮೇಲಿನ ಸ್ತರದಲ್ಲಿ 'ಚಾವಡಿ' ಎಂಬ ಪದದ ಪ್ರಯೋಗ ಬಂದಿದೆ. ವಿಜಯನಗರ ಕಾಲದ ತಮಿಳು ಶಾಸನಗಳಲ್ಲಿ ಇದನ್ನು ನಾಡು ಅಥವಾ ಕುಟ್ರಂಗೆ ಸಮಾನಾರ್ಥದಲ್ಲಿ ಉಶಾವಡಿ/ಸಾವಡಿ(ಚಾವಡಿ) ಎಂದು ಬಳಸಿರುವ ಹಾಗೂ ಇವನ್ನು ಅನೇಕ ಪಟ್ರು ಗಳಾಗಿ ವಿಭಾಗಿಸಿದ್ದ ಬಗ್ಗೆ ಟಿ. ವಿ. ಮಹಾಲಿಂಗಂರವರು ತಮ್ಮ South Indian Polityಯಲ್ಲಿ ಹೇಳಿರುತ್ತಾರೆ. ವಿಜಯನಗರಪೂರ್ವದಲ್ಲಿ 'ನಾಡು' ಎಂಬುದು ಒಂದು ಪ್ರಾದೇಶಿಕ ವಿಭಾಗವಾಗಿರುವಂತೆಯೇ ಸ್ಥಳೀಯ ಮುಖಂಡರಿಂದ ಕೂಡಿದ ಒಂದು ಸಭೆ (ಗ್ರಾಮಕೂಟ) ಕೂಡ ಆಗಿದ್ದಿತು. ಆದರೆ ವಿಜಯನಗರ ಕಾಲದಲ್ಲಿ ನಾಡು ಎಂಬುದು ಸಭೆಯೆಂಬ ಅರ್ಥಕ್ಕಿಂತ ಒಂದು ಪ್ರಾದೇಶಿಕ ವಿಭಾಗ ಎಂಬ ಅರ್ಥದಲ್ಲಿ ಬಳಕೆಯಾಗತೊಡ ಗಿದಾಗ ಅದಕ್ಕೆ ಪರ್ಯಾಯವಾಗಿ ಸ್ಥಳೀಯ ಆಡಳಿತ

ಕೃಷ್ಣಾ ನದಿ
ಕೊಂಡವೀಡು ರಾಜ್ಯ
ಕೊಂಡವೀಡು
ಹಂಪೆ
ರಾಯದುರ್ಗ ರಾಜ್ಯ
ಉದಯಗಿರಿ ರಾಜ್ಯ
ಉದಯಗಿರಿ
ಪೆನುಗೊಂಡೆ ರಾಜ್ಯ
ಪೆನುಗೊಂಡೆ
ಚಂದ್ರಗಿರಿ ರಾಜ್ಯ
ಚಂದ್ರಗಿರಿ
ಚಿಕ್ಕಬಳ್ಳಾಪುರ
ಮುಳಬಾಗಿಲು
ಮುಳುವಾಯಿ ರಾಜ್ಯ
ಬೇಲೂರು
ಬಾರಕೂರು
ಕಾವೇರಿನದಿ
ಚೋಳ ರಾಜ್ಯ
ತಂಜಾವೂರು
ಮದುರೈ
ತೆಂಕಾಸಿ
ಪಾಂಡ್ಯ ರಾಜ್ಯ

ವಿಜಯನಗರ ಸಾಮ್ರಾಜ್ಯದಲ್ಲಿದ್ದ ರಾಜ್ಯಗಳು

ಕೂಟ ಅಥವಾ ಸಭೆಯ ಸೂಚಕವಾಗಿ ಈ ಚಾವಡಿ ಎಂಬ ಪದವು ಬಳಕೆಗೆ ಬಂದಿತೆಂದು ಹೇಳಬಹುದು. ಮೈಸೂರು ಅರಸರ ಕಾಲದ ಶಾಸನಗಳಲ್ಲಿ ಚಾವಡಿ ಎಂಬುದು ಕೆಳಸ್ತರದಲ್ಲಿದ್ದ ಆಡಳಿತಕ್ಕೆ ಸಂಬಂಧಿಸಿದ ಪಂಚಾಯಿತಿ ಸಭೆ, ಕಟ್ಟೆ, ಕಛೇರಿ ಎಂದು ಪ್ರಯೋಗ ವಾಗಿರುವುದನ್ನು ಇಲ್ಲಿ ಗಮನಿಸಬೇಕಾಗಿದೆ. (ಉದಾ. : ಶೂರಗಿರಿಚಾವಡಿ).ಕೋಳಾಲ ಚಾವಡಿಯು ಬೆಂಗಳೂರು ಜಿಲ್ಲೆಯ ವಿಜಯನಗರ ಕಾಲದ ಶಾಸನಗಳಲ್ಲೂ ಬೇಲೂರು ಚಾವಡಿಗಳು ಹೊಸಕೋಟೆ ತಾಲೂಕಿನ ಶಾಸನಗಳಲ್ಲೂ ಚೇಲೂರು (ಬೇಲೂರು ?) ಚಾವಡಿ ಎಂಬುದು ನೆಲ ಮಂಗಲ ತಾಲೂಕಿನ ಶಾಸನಗಳಲ್ಲೂ ರಾಜ್ಯದ ನಂತರ ಮತ್ತು ನಾಡಿನ ಮೇಲಿನ ಸ್ತರದಲ್ಲಿ ಪ್ರಯುಕ್ತವಾಗಿರುವ ಚಾವಡಿಗಳಾಗಿವೆ.

ವಿಜಯನಗರ ಕಾಲದ ಕರ್ನಾಟಕದ ಇತರ ಕಡೆಯ ಶಾಸನಗಳಲ್ಲಿ ಅಷ್ಟಾಗಿ ಕಂಡುಬರದ 'ಪಟ್ಟಡಿ' ಎಂಬ ಆಡಳಿತ ವಿಭಾಗಸೂಚಕ ಪದ ಬೆಂಗಳೂರು ಮತ್ತು ಕೋಲಾರ ಜಿಲ್ಲೆಯ ಶಾಸನಗಳಲ್ಲಿ ಪ್ರಯೋಗವಾಗಿರು ವುದು ಗಮನಾರ್ಹ ಅಂಶವಾಗಿದೆ:

೧. "ಕೋಳಾಲ ಸೀಮೆಯೊಳಗಣ ಕೊತನೂರ ಪಟ್ಟಡೆ ಸ್ಥಳದ ಕೆಂದಟ್ಟು ಗ್ರಾಮ ೧" (ಎ.ಕ., ೧೭, ಕೋಲಾರ ೩೦೪, ಕೆಂದಟ್ಟಿ, ಕ್ರಿ. ಶ. ೧೫೬೫) ;

೨. "ಹೊಸಕೋಟೆ ಸೀಮೆಯ ಹುಲುರು ಪಟ್ಟಿ ಡಿಯ ಮುಗುಬಾಳು ಎಂಬ ಗ್ರಾಮಕೆ ಪ್ರತಿನಾಮ ವೀರಭದ್ರಪುರ ಗ್ರಾಮ ೧" (ಎ. ಕ., ೯, ಹೊಸಕೋಟೆ ೯೪, ಮುಗು ಬಾಳು, ಕ್ರಿ.ಶ. ೧೫೬೪) ;

೩. "ಹೊಳಲಿ ಪಟಿಡೆಯ ಹರಳಕುಂಟೆಗೆ ಪ್ರತಿನಿದ್ಯವಾದಂಥ ಶಿವಕಾಂಚಿಪುರವೆಂಬ ಅಗ್ರಹಾರ" (ಎ.ಕ., ೧೦, ಕೋಲಾರ ೨೪೭, ಹರಳಕುಂಟೆ, ಕ್ರಿ.ಶ. ೧೬೩೭).

ಈ ಪ್ರಯೋಗಗಳನ್ನು ಗಮನಿಸಿದರೆ ಪಟ್ಟಡಿ ಯನ್ನು ಪಟ್ಟಡೆ, ಪಟ್ಟಿಡೆಯೆಂದು ಕರೆದಿರುವುದು ಕಂಡುಬರುತ್ತದೆ. ಇದು ನಾಡು ಅಥವಾ ಸೀಮೆಯ ಕೆಳಸ್ತರದಲ್ಲಿ ಅಂದರೆ ಸ್ಥಳದ ಸಮನಾಂತರದಲ್ಲಿ ಬಳಕೆ ಯಾಗಿದೆ.

'ಪಟ್ಟ' ಎಂಬ ಪದವು ಒಂದು ಸಣ್ಣ ಪ್ರಾದೇಶಿಕ ವಿಭಾಗ ಎಂಬ ಅರ್ಥದಲ್ಲಿ ಕೆಲವು ಪ್ರಾಚೀನ ಶಾಸನ ಗಳಲ್ಲಿ (ಎ. ಇಂ., ೩೩, ಪು. ೩೦೪) ಪ್ರಯೋಗ ವಾಗಿದೆ. ಪಟ್ಟಡಿ ಎಂಬುದು ಪಟ್ಟ+ವಾಡಿ ಎಂಬ ಪದಗಳಿಂದಾದ ಪಟ್ಟವಾಡಿ>ಪಟ್ಟಡಿ ಆಗಿರಬೇಕೆಂದು ತೋರುತ್ತದೆ. ವಾಡಿ ಎಂಬುದು 'ಬಾಡ'ದಿಂದ ನಿಷ್ಪನ್ನವಾದ ಗ್ರಾಮ ಸ್ಥಳ ಎಂಬ ಅರ್ಥವುಳ್ಳದ್ದೆಂಬುದು ತಿಳಿದ ವಿಷಯವೇ ಆಗಿದೆ.

ಕ್ರಿ.ಶ. ೧೧೪೦ರ ದೊಮ್ಮಲೂರಿನ ಶಾಸನದಲ್ಲಿ ಸೊಂಡೆಕೊಪ್ಪ ವೇಂಠೆಯ ಪ್ರಸ್ತಾಪ ಬಂದಿದೆ. ಇದು ರಾಜ್ಯದೊಳಗಣ ಅಂತರ್ಭಾಗ ; ಸೀಮೆ ಅಥವಾ ನಾಡು ಗಳು ವೇಂಠೆಯದೊಳಗೆ ಅಂತರ್ಗತವಾಗಿರುತ್ತವೆ. 'ವೇಂಠೆ' ಮತ್ತು 'ವಳಿತ'ಗಳು ಅಭಿನ್ನವೆಂದು ಅಭಿ ಪ್ರಾಯ ವ್ಯಕ್ತಪಟ್ಟಿದೆ. ಆದರೆ ಬೆಂಗಳೂರು ಜಿಲ್ಲೆಯ ಶಾಸನಗಳಲ್ಲಿ ಪ್ರಯುಕ್ತವಾಗಿರುವ 'ವಳಿತ' ಪದವು ನಾಡು ಅಥವಾ ಸೀಮೆಯ ಕೆಳಸ್ತರದಲ್ಲಿ, ಅಂದರೆ ಸ್ಥಳಕ್ಕೆ ಸಮಾನ ಸ್ತರದಲ್ಲಿ ಪ್ರಯೋಗವಾಗಿದ್ದು, ಅವೆಲ್ಲವೂ ೧೬೮೬ರ ನಂತರ ಅವಧಿಗೆ ಸೇರಿದವಾಗಿವೆ.

ಇನ್ನು ಕೆಳಹಂತದ ಆಡಳಿತ ವಿಭಾಗಗಳಲ್ಲಿ ನಾಡು ಅಥವಾ ಸೀಮೆ, ಸ್ಥಳ ಮತ್ತು ಗ್ರಾಮಗಳು ಮುಖ್ಯ ವಾಗುತ್ತವೆ. ನಾಡು ಎಂಬುದು ಕರ್ನಾಟಕ ಪ್ರದೇಶ ದಲ್ಲಿ ಹೆಚ್ಚು ಬಳಕೆಯಲ್ಲಿದ್ದ ಪದವೆಂತಲೂ ಸೀಮೆ ಎಂಬುದು ತೆಲುಗು ಪ್ರದೇಶಗಳಲ್ಲಿ ಹೆಚ್ಚು ಪ್ರಚಲಿತವಿದ್ದ ಸಮಾನ ಸ್ತರದ ಪ್ರಾದೇಶಿಕ ವಿಭಾಗಗಳೆಂತಲೂ ವಿದ್ವಾಂಸರು ಅಭಿಪ್ರಾಯ ಪಟ್ಟಿರುತ್ತಾರೆ. ಆದರೂ ಕೆಲವು ಕಡೆ ಸೀಮೆ ಎಂಬುದು ನಾಡಿನ ಒಂದು ಉಪಭಾಗ ವಾಗಿ ಕ್ವಚಿತ್ತಾಗಿ ಪ್ರಯೋಗಗೊಂಡಿರುವುದುಂಟು.

ಬೆಂಗಳೂರು ಜಿಲ್ಲೆಯಲ್ಲಿನ ಕ್ರಿ. ಶ. ೧೪೦೦ ಕ್ಕಿಂತಲೂ ಹಿಂದಿನ ಪ್ರಯೋಗಗಳೆಲ್ಲ 'ನಾಡು' ಎಂಬ ಪ್ರತ್ಯಯವನ್ನೇ ಪಡೆದಿರುವುದು ಕಂಡುಬರುತ್ತದೆ. ಅವು ಗಳಲ್ಲಿ ಬಹಳಷ್ಟು ಗಂಗ, ಚೋಳ ಮತ್ತು ಹೊಯ್ಸಳರ ಕಾಲದಲ್ಲೇ ಪ್ರಚಲಿತವಿದ್ದ ನಾಡುಗಳಾಗಿರುತ್ತವೆ.

ಉದಾಹರಣೆಗೆ, ಎಲಹಂಕನಾಡು, ಕಿಳಲೈನಾಡು, ಕುಕ್ಕಲನಾಡು, ಕೈವಾರನಾಡು, ಪುಲ್ಲಿಯೂರುನಾಡು, ತುರ್ೖವಳಿನಾಡು, ವೆಪ್ಪೂರುನಾಡು. ಮೊರಸುನಾಡು, ಸೀಗಲನಾಡು, ಹೊಂಬ್ಮಳಿಗೆನಾಡು, ಸಣ್ಣೆನಾಡು, ನಲ್ಲೂರುನಾಡು, ಹಲುಕಡಿನಾಡು ಮುಂತಾದವು. ಆದರೆ ಕ್ರಿ.ಶ. ೧೪೦೦ರ ನಂತರದ ಶಾಸನಗಳಲ್ಲಿ ಬಹು ಮಟ್ಟಿಗೆ ವಿಜಯನಗರದ ಕಾಲದಲ್ಲೇ ಹೊಸದಾಗಿ ಸೇರ್ಪಡೆಯಾದ ಹೊಸ ನಾಡುಗಳೆಲ್ಲವೂ 'ಸೀಮೆ' ಎಂಬ ಪ್ರತ್ಯಯವನ್ನು ಮಾತ್ರ ಪಡೆದಿರುವುದು ಕಂಡು ಬರುತ್ತದೆ. ಉದಾಹರಣೆಗೆ, ಸೋಲೂರು ಸೀಮೆ, ಹಣಬೆಯ ಸೀಮೆ, ಕೋಡಂಬಳ್ಳಿ ಸೀಮೆ, ಚಂನಪಟ್ಟಣ ಸೀಮೆ, ನೆಲಮಂಗಲ ಸೀಮೆ, ಹೆಜಾಜಿ ಸೀಮೆ, ಹೊಸ ಕೋಟೆ ಸೀಮೆ, ತಿಪ್ಪೂರು ಸೀಮೆ, ಗೂಳೂರು ಸೀಮೆ, ಚಳ್ಳಕನ ಸೀಮೆ, ನೆಲವಾಗಿಲ ಸೀಮೆ ಮುಂತಾದವು. ಆದ್ದರಿಂದ ಸೀಮೆ ಎಂಬುದು ತೆಲುಗು ಪ್ರದೇಶಗಳಲ್ಲಿ ಹೆಚ್ಚು ಪ್ರಚಲಿತವಿದ್ದ ಪ್ರಾದೇಶಿಕ ವಿಭಾಗ ಎಂಬ ವಿದ್ವಾಂಸರ ಅಭಿಪ್ರಾಯ ತಪ್ಪಾಗುತ್ತದೆ. ಆದರೆ ಅದು ವಿಜಯನಗರ ಆಳಿಕೆಯಲ್ಲಿ, ಒಂದು ಆಡಳಿತ ವಿಭಾಗ ಎಂಬ ಸ್ಪಷ್ಟ ಅರ್ಥದಲ್ಲಿ, ಸೇರ್ಪಡೆಯಾದ ಹೊಸ ಪದವಾಗಿದೆ.*

ಸೀಮೆ ಎಂಬುದು ಸಂಸ್ಕೃತದ 'ಸೀಮಾ' ಪದವೇ ಆಗಿದ್ದು ವಿಜಯನಗರ ಕಾಲದಲ್ಲಿ ಒಂದು ಆಡಳಿತ ವಿಭಾಗ ಎಂಬರ್ಥದಲ್ಲಿ ಪ್ರಯೋಗವಾಗಿದೆ. ಆದರೆ ಕ್ರಿ. ಶ. ೧೪೦೦ಕ್ಕಿಂತ ಹಿಂದಿನ ಕನ್ನಡ ಶಾಸನಗಳಲ್ಲಿ ಸೀಮೆ ಎಂಬುದು ಎಲ್ಲೆ (boundary) ಎಂಬ ಅರ್ಥ ದಲ್ಲೇ ಪ್ರಯೋಗವಾಗಿರುವುದು ಗಮನಾರ್ಹ ಸಂಗತಿ.

ನಾಡು ಅಥವಾ ಸೀಮೆಯ ಕೆಳಸ್ತರದಲ್ಲಿ ಸ್ಥಳ ಮತ್ತು ಗ್ರಾಮಗಳು ಬರುತ್ತವೆ. ಅನೇಕ ಗ್ರಾಮಗಳ ಸಮೂಹವೇ 'ಸ್ಥಳ'. 'ಅಷ್ಟಗ್ರಾಮ ಸೀಮೆ' ಎಂಬುದು ಸ್ಥಳದ ಪರಿಮಿತಿಗೆ ಸಂಬಂಧಪಟ್ಟಿರಬಹುದು. ಸ್ಥಳಕ್ಕೆ ಪರ್ಯಾಯವಾಗಿ 'ಸಂಮತು' ಎಂಬ ಪ್ರಯೋಗವು ಉಂಟು. ವಿಜಯನಗರ ಅರಸರ ಕಾಲದಲ್ಲಿ ವಿಶೇಷ ವಾಗಿ ಬಳಕೆಯಾಗಿರುವ ಈ ಪ್ರದೇಶವಾಚಕ ಪದವು ಬಹುಮಟ್ಟಿಗೆ ಇಂದಿನ 'Firka'ದೊಂದಿಗೆ ಹೊಂದು ತ್ತದೆ. ಬೆಂಗಳೂರು ಜಿಲ್ಲೆಯಲ್ಲಿನ ವಿಜಯನಗರ ಕಾಲ ದಲ್ಲಿ ಪ್ರಯುಕ್ತವಾಗಿರುವ ಸ್ಥಳಗಳಲ್ಲಿ ಅಂಣೆಗನಹಳ್ಳಿ ಸ್ಥಳ, ಅತ್ತಿಬೆಲೆ ಸ್ಥಳ, ಕಲೆಯಂದ ಸ್ಥಳ, ಕಾಕೋಳಲ ಸ್ಥಳ, ಕೂಡಲೂರ ಸ್ಥಳ, ಚಪಗಾಳಿ ಸ್ಥಳ, ಸಿವ ಮುಂದೂರ ಸ್ಥಳ, ನಿಜಗಲು ಸ್ಥಳ, ನಂಜಿಗುಳಿ ಸ್ಥಳ, ಬಾಣವಾಡಿ ಸ್ಥಳ, ಸುಂಣಬರೆಯ ಸ್ಥಳ, ಹಲಸೂರು ಸ್ಥಳ. ಹೊಂಗನೂರು ಸ್ಥಳ ಮುಂತಾದವು ಶಾಸನೋಕ್ತ ವಾಗಿವೆ. (ಈ ಸ್ಥಳಗಳಲ್ಲಿ ಅಂತರಗತವಾಗಿದ್ದ ಶಾಸ ನೋಕ್ತ ಗ್ರಾಮಗಳನ್ನು ಅನಬಂಧದಲ್ಲಿ ಸೂಚಿಸ ಲಾಗಿದೆ).**

ಒಟ್ಟಾರೆ, ವಿಜಯನಗರ ಸಾಮ್ರಾಜ್ಯದ ಆಡಳಿತ ವಿಭಾಗಗಳಿಗೆ ಸಂಬಂಧಿಸಿದ ಈ ಪರಿಶೀಲನೆಯಿಂದ ತಿಳಿದುಬರುವ ಮುಖ್ಯವಾದ ಅಂಶಗಳನ್ನು ಈ ಕೆಳ ಕಂಡಂತೆ ಪಟ್ಟಿ ಮಾಡಬಹುದು :

೧. ವಿಜಯನಗರ ಅರಸರು ತಮ್ಮ ವಿಶಾಲ ವಾದ ಸಾಮ್ರಾಜ್ಯದಲ್ಲಿ ಏಕರೂಪವಾದ ಆಡಳಿತ ವಿಭಾಗಗಳನ್ನು ಜಾರಿಗೊಳಿಸಲು ಸತತ ಪ್ರಯತ್ನವನ್ನು ಮಾಡಿದ್ದರು.

---

* ಕ್ರಿ.ಶ. ೧೫೬೫ರ ನಂತರ ಅಂದರೆ ಅರವೀಡು ವಂಶದ ಆಡಳಿತದ ಅವಧಿಯಲ್ಲಿ ಉಲ್ಲೇಖಗೊಂಡಿರುವ ಈ ಸ್ತರದ ಆಡಳಿತ ವಿಭಾಗಗಳೆಂದರೆ ಆವತಿನಾಡು, ಬಳಾಲಪುರದ ಸೀಮೆ, ಬಿಲಗೊಂಡನಹಳ್ಳಿ ಸೀಮೆ ಮತ್ತು ಮಾಗಡಿ ಸೀಮೆಗಳು ಮಾತ್ರ. ಇವು ಈ ಅವಧಿಯಲ್ಲಿ ಹೆಚ್ಚು ಪ್ರಬಲರಾಗಿದ್ದ ಸ್ಥಳೀಯ ಪಾಳೆಯಗಾರರ ಮುಖ್ಯ (ಕೇಂದ್ರ) ಸ್ಥಳಗಳು ಕೂಡ ಆಗಿದ್ದ ವೆಂಬುದನ್ನು ಗಮನಿಸಬೇಕಾದ ಅಂಶವಾಗಿದೆ.

** ಕ್ರಿ. ಶ. ೧೬೫೦ರ ನಂತರದ ಅವಧಿಯ ಆಡಳಿತ ವಿಭಾಗಗಳ ಅಧ್ಯಯನ ಬಹಳ ವಿಶಿಷ್ಟವಾದುದು. ಏಕೆಂದರೆ ಮರಾಠ, ಮೊಗಲ್ ಮತ್ತು ಬ್ರಿಟಿಷರ ಆಳ್ವಿಕೆಯ ಸ್ಪಷ್ಟ ಹೆಜ್ಜೆಗಳನ್ನು ಅವು ಒತ್ತಿರುತ್ತವೆ. ಸರ್ಕಾರ, ಹೋಬಳಿ, ತರಫ್, ಕಸಬೆ, ತಾಲೂಕ್, ಸಮ್ಮತು ಮುಂತಾದವು ಈ ಅವಧಿಯಲ್ಲಿ ಬಳಕೆಗೆ ಬಂದ ಪದಗಳಾಗಿದ್ದು ಇವುಗಳಲ್ಲಿ ಬಹಳಷ್ಟನ್ನು ನಾವು ಇಂದಿಗೂ ಬಳಸುತ್ತಿರುವುದು ಸರಿಯಷ್ಟೆ.

೨. ಅವರ ಈ ಪ್ರಯತ್ನ ಮೇಲಿನ ಮತ್ತು ಕೆಳಗಿನ ಸ್ತರದ ಆಡಳಿತ ವಿಭಾಗಗಳ ವಿಷಯದಲ್ಲಿ ಮಾತ್ರ ಯಶಸ್ಸನ್ನು ತಂದಿದ್ದಿತು.

೩. ಮಧ್ಯಸ್ತರದ ಆಡಳಿತ ವಿಭಾಗಗಳು ಹಿಂದಿನಂತೆಯೇ ವೈವಿಧ್ಯಮಯವಾಗಿಯೇ ಉಳಿದುಕೊಂಡಿದ್ದವು.

೪. ಇವರು ಕರ್ನಾಟಕ ಮತ್ತು ಆಂಧ್ರಪ್ರದೇಶಗಳ ಭಾಗಗಳಲ್ಲಿ ಹಿಂದೆ ಇದ್ದ ನಾಡು ಎಂಬ ಪ್ರದೇಶವಾಚಕಕ್ಕೆ ಪರ್ಯಾಯವಾಗಿ ಮತ್ತು ಪೂರಕವಾಗಿ 'ಸೀಮೆ' ಎಂಬ ಪದವನ್ನು ಹೆಚ್ಚು ಬಳಕೆಗೆ ತಂದರು.

೫. ಕೆಳಸ್ತರದ 'ಸ್ಥಳ' ಎಂಬ ಆಡಳಿತ ಉಪವಿಭಾಗವನ್ನು ಇವರು ಹೆಚ್ಚು ವ್ಯಾಪಕವಾಗಿ ಮತ್ತು ನಿರ್ದಿಷ್ಟವಾಗಿ ಬಳಸಿದರು.

## ಅನುಬಂಧ

| | ಮೇಲ್‌ಸ್ತರದ ಆಡಳಿತ ವಿಭಾಗಗಳು ದೇಶ/ರಾಜ್ಯ/ನಾಡು/ಸೀಮೆ/ವಳಿತ, ವೇಂಠೆ ಇತ್ಯಾದಿ | ಕೆಳಸ್ತರದ ಆಡಳಿತ ವಿಭಾಗಗಳು ಸ್ಥಳ | ಅಂತರಗತ ಗ್ರಾಮಗಳು | ಆಕರ |
|---|---|---|---|---|
| | ೧ | ೨ | ೩ | ೪ |
| ೧. | | ಕಲಿಯೂರ ಸ್ಥಳ | ಕಲಿಯು (ಕಲ್ಯ) | ಎಪಿಗ್ರಾಫಿಯ ಕರ್ನಾಟಿಕ, ಸಂಪುಟ ಮಾಗಡಿ ೧೭ ಕಲ್ಯ (೧೩೬೨) ಮಾಗಡಿ ೨೭ ಕಲ್ಯ (೧೬೪೯ ?) |
| ೨. | ಹೊಯ್ಸಳಿಗೆ ನಾಡು | ಸುಣಬರೆಯ ಸ್ಥಳ | ಸುಣಬರೆ (ಸಣವಾರ?) | ಅದೇ, ಆನೇಕಲ್ ೮೨ ಬನ್ನೇರುಘಟ್ಟ (೧೩೬೩) |
| ೩. | | ಹಲಸೂರು ಸ್ಥಳ | ಇಲಿತೊರೆ, ಮಾದಿಗೊಂಡನಹಳ್ಳಿ ಸಾದುಹಳ್ಳಿ | ಅದೇ, ದೇವನಹಳ್ಳಿ ೮೧ ಜೋಡಿಸಾದರಹಳ್ಳಿ (೧೪೨೫) |
| ೪. | ಹುಲುಕಡಿನಾಡು | ತಿಪ್ಪೂರಸ್ಥಳ | ಹೆಜ್ಜಾಜಿ, ವರದೋಹಳ್ಳಿ ಬಯಿರಾಪುರ | ಅದೇ, ದೊಡ್ಡಬಳ್ಳಾಪುರ ೪೨ ಪುಟ್ಟೈನ ಅಗ್ರಹಾರ (೧೪೯೩) |
| ೫. | ಕುಕ್ಕಲನಾಡು | ಕಂನೆಲ್ಲಿಯ ಸ್ಥಳ | ಕೆಂಪಬಸವಯ್ಯನ ಹಳ್ಳಿ ಕಾಚುಹಳ್ಳಿ, ಹಾರೋಹಳ್ಳಿ ಬಸಹಳ್ಳಿ > ಗಂಗಾಧರಪುರ ಪ್ರಾಕುಗೊಂಗಡಿಹಳ್ಳಿ > ತಿಂಮಣರಾಜಪುರ | ಅದೇ, ಬೆಂಗಳೂರು ೧೨೩ ಗೊಂಗಡಿಪುರ (೧೪೯೩) |
| ೬. | ಪೊಯಿಸಣನಾಡು ಚೆಂನಪಟ್ಟಣ(ರಾಜ್ಯ) ಕೋಡಂಬಳ್ಳಿ ಸೀಮೆ | ನಿಟ್ಟೂರಭಟ್ಟವೃತ್ತಿಯ ಸ್ಥಳ | ಎಳಸಿಗೆ ಗ್ರಾಮ, ಕೋಡಂಬಳ್ಳಿ | ಅದೇ, ಚನ್ನಪಟ್ಟಣ ೫೨ ಕೋಡಂಬಳ್ಳಿ (೧೪೯೯) |
| ೭. | | ಸಿವಮುಂದೂರ ಸ್ಥಳ | (ಹನ್ನೆರಡುಹಳ್ಳಿ ವೊಳಗಾದ) | ಅದೇ, ಹೊಸಕೋಟೆ ೧೨೧ ಜೋತಿಪುರ (೧೫೦೬) |
| ೮. | | ಕೂಡಲೂರ ಸ್ಥಳ | ಹೊಸಹಳ್ಳಿ, ವೊಗೆಹಳ್ಳಿ ಕೂಡಲೂರು | ಅದೇ, ಚೆಂನಪಟ್ಟಣ ೧೫೬೩ ಹೊಟ್ಟೇನ ಹೊಸಹಳ್ಳಿ (೧೫೧೩) |

| | ೧ | ೨ | ೩ | ೪ |
|---|---|---|---|---|
| ೯. | ಅರುಳಹಾಳರಾಜ್ಯ ಸಿಗಲನಾಡು ಮುಕೊಡಲಸೀಮೆ | ಅಂಣಿಗನಹಳ್ಳಿ ಸ್ಥಳ | ನಲ್ಲಹಳ್ಳಿ | ಅದೇ, ಕನಕಪುರ ೩೧ ನಲ್ಲಹಳ್ಳಿ (೧೫೩೦) |
| ೧೦. | ಬೇಲೂರು ಚಾವಡಿ ಎಲಹಂಕ ನಾಡು ಶಿವನಸಮುದ್ರ ಸೀಮೆ | ಕಾಕೋಳಲ ಸ್ಥಳ | ಕಾಕೋಳಲ | ಅದೇ, ನೆಲಮಂಗಲ ೩೧ ಹೆಸರುಘಟ್ಟ (೧೫೩೫) |
| ೧೧. | ಸೊಂಡೇಕೊಪ್ಪ ವೇಂಠೆ | ಸೊಂಡೆಕೊಪ್ಪ ಸ್ಥಳ | ಹಾರೋ ಕೇತನಹಳ್ಳಿ | ಅದೇ, ನೆಲಮಂಗಲ ೧೦ ಹಾರೋಕ್ಯಾತನಹಳ್ಳಿ (೧೫೩೩) |
| ೧೨. | | ಬಾಣವಾಡಿ ಸ್ಥಳ | ರಾಮಾಪುರ | ಅದೇ, ಮಾಗಡಿ ೭೪ ಬಾಣವಾಡಿ (೧೫೪೭) |
| ೧೩. | | ನಂಜಿಗುಳಿಯ ಸ್ಥಳ | ....ವಿಟ್ಟಸಂದ್ರ | ಅದೇ, ಹೊಸಕೋಟೆ ೨ ನಂದಗುಡಿ (೧೫೫೯) |
| ೧೪. | | ಚಪಗಾಳಿ ಸ್ಥಳ | ಚನ್ನಸಮುದ್ರ | ಅದೇ, ಕನಕಪುರ ೩೨ ಚಂನಸಂದ್ರದೊಡ್ಡಿ (೧೫೬೩) |
| ೧೫. | ಬೇಲೂರು ಚಾವಡಿ ಎರ್ರನಾಡು ನೆಲವಾಗಿಲ ಸೀಮೆ | ನೆಲವಾಗಿಲ ಸ್ಥಳ | ಅನುಪುಹಳ್ಳಿ | ಅದೇ, ಹೊಸಕೋಟೆ ೭೩ ಅನುಪುಹಳ್ಳಿ (೧೬೨೦) |
| ೧೬. | ....ಕಾನಲೂರ ವಳಿತ? | ರಾಮರಹಳ್ಳಿಯ ಸ್ಥಳ | ಖಿನಮಂಗಲ | ಅದೇ, ಆನೇಕಲ್ ೮೧ ಬನ್ನೇರುಘಟ್ಟ |
| ೧೭. | | ಕಬ್ಬಹಳ್ಳಿ ಸ್ಥಳ | (ಗುಂಮಳಾಪುರದ ಸಿಂಹಾಸನ) | ಅದೇ, ಕನಕಪುರ ೧೨೩ ದೊಡ್ಡ ಕಬ್ಬಹಳ್ಳಿ (೧೭೨೬) |
| ೧೮. | ನೆಲವಂಗಲದ ಸೀಮೆ | ನೆಲಮಂಗಲ ಸ್ಥಳ | ಸೊಂಡೆಕೊಪ್ಪ, ದಾಬ ನಾಯಕನಹಳ್ಳಿ ಮಟ್ಟನ ಕುರುಚಿಹಳ್ಳಿ | ಅದೇ, ನೆಲಮಂಗಲ ೮ ಸೊಂಡೇಕೊಪ್ಪ (೧೭೬೩) |
| ೧೯. | | ಬೆಂಗಳೂರು ಸ್ಥಳ | ಬಿಂಗೀಪುರ (ಜಿಗಣಿ ಹೋಬಳಿ) | ಅದೇ, ಆನೇಕಲ್ ೯೦ ಬಿಂಗಿಪುರ (೧೭೬೦) |

## ಗ್ರಂಥಋಣ


1. *Epigraphia Carnatica*, Vol. IX
2. *Epigraphia Indica*, Vol. XXXIII
3. D.C. Sircar : *Indian Epigraphy*
4. T. V. Mahalingam : *South Indian Polity*
5. ಎ. ವಿ. ವೆಂಕಟರತ್ನಂ : ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಳೀಯ ಸರ್ಕಾರ
6. ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ–ಕನ್ನಡನಿಘಂಟು